# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 774 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎಂ.ಸಿ.ವೇಣುಗೋಪಾಲ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 17.12.2018 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಜಿಲ್ಲೆಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ಹಿಂದುಳಿದ ವರ್ಗಗಳ ಇಲಾಖೆಯಿಂದ ಹಮ್ಮಿಕೊಳ್ಳಲಾಗಿರುವ ಕಾರ್ಯಕ್ರಮಗಳಾವುವು; | **ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**<br>ಹಿಂದುಳಿದ ವರ್ಗಗಳ ಜನರ ಅಭಿವೃದ್ಧಿಗಾಗಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಕಳೆದ ಮೂರು ವರ್ಷಗಳಿಂದ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಜಾರಿಗೊಳಿಸಿರುವ/ಅನುಷ್ಠಾನ ಗೊಳಿಸಿರುವ ಯೋಜನೆಗಳ ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಿದೆ. |
| ಆ) | ಸದರಿ ಯೋಜನೆಯಡಿ ಕೊಳವೆಬಾವಿಗಳನ್ನು ಕೊರೆಯಲು ಖರ್ಚಾದ ಹಣವೆಷ್ಟು; ಕೊರೆದ ಕೊಳವೆಬಾವಿಗಳಿಗೆ ವಿದ್ಯುದ್ದೀಕರಣ ಸಂಪರ್ಕ ಮತ್ತು ಪಂಪ್ ಸೆಟ್ ಅಳವಡಿಸಲಾಗಿದೆಯೇ: | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಗಂಗಾ ಕಲ್ಯಾಣ ಯೋಜನೆಯಡಿ ಕಳೆದ 3 ವರ್ಷಗಳಲ್ಲಿ ಕೊಳವೆ ಬಾವಿಗಳನ್ನು ಕೊರೆಯಲು ಖರ್ಚಾದ ಹಣ ರೂ.245.85 ಕೋಟಿ.<br><br>ಕೊರೆದ ಬಾಗಶಃ ಕೊಳವೆ ಬಾವಿಗಳಿಗೆ ವಿದ್ಯುದ್ದೀಕರಣ ಹಾಗೂ ಪಂಪ್‌ಸೆಟ್ ಅಳವಡಿಸಲಾಗಿದೆ. |
| ಇ) | ಹಾಗಿದ್ದಲ್ಲಿ, ಎಷ್ಟು ಕೊಳವೆ ಬಾವಿಗಳಿಗೆ ವಿದ್ಯುತ್ ಅಳವಡಿಸಲಾಗಿದೆ: ಉಳಿಕೆ ವಿದ್ಯುದ್ದೀಕರಣ ಸಂಪರ್ಕ ಮತ್ತು ಪಂಪ್‌ಸೆಟ್ ಅಳವಡಿಸ ಬೇಕಾಗಿರುವ ಕೊಳವೆ ಬಾವಿಗಳ ಸಂಖ್ಯೆ ಎಷ್ಟು? | ಕೊರೆದ 13260 ಕೊಳವೆ ಬಾವಿಗಳ ಪೈಕಿ<br>ವಿದ್ಯುತ್ ಅಳವಡಿಸಿದ ಕೊಳವೆ ಬಾವಿಗಳ ಸಂಖ್ಯೆ:<br>4744<br>ವಿದ್ಯುದ್ದೀಕರಣ ಸಂಪರ್ಕಕ್ಕೆ ಬಾಕಿ ಕೊಳವೆ ಬಾವಿಗಳ ಸಂಖ್ಯೆ:<br>8516<br>ಪಂಪ್‌ಸೆಟ್ ಅಳವಡಿಸಬೇಕಾಗಿರುವ ಕೊಳವೆ ಬಾವಿಗಳ ಸಂಖ್ಯೆ:<br>4507 |

**ಸಂ: ಹಿಂವಕ 1261 ಬಿಎಂಎಸ್ 2018**

**(ಸಿ.ಪುಟ್ಟರಂಗಶೆಟ್ಟಿ)**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.**

**ಶ್ರೀ ಎಂ.ಸಿ. ವೇಣುಗೋಪಾಲ್, ಮಾನ್ಯ ವಿಧಾನಸಭಾ ಸದಸ್ಯರು**

**ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:774ಕ್ಕೆ ಅನುಬಂಧ**

| | |
|---|---|
| I. | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |
| | ಶೈಕ್ಷಣಿಕ ಕಾರ್ಯಕ್ರಮಗಳು |
| 1 | ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು |
| 2 | ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳು |
| 3 | ಸರ್ಕಾರಿ ಆಶ್ರಮಶಾಲೆಗಳು |
| 4 | ಖಾಸಗಿ ಅನುದಾನಿತ ಮೆಟ್ರಿಕ್–ಪೂರ್ವ ವಿದ್ಯಾರ್ಥಿನಿಲಯಗಳು |
| 5 | ಖಾಸಗಿ ಅನುದಾನಿತ ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳು |
| 6 | ಖಾಸಗಿ ಅನುದಾನಿತ ಅನಾಥಾಲಯಗಳು |
| 7 | ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ |
| | ವಿದ್ಯಾರ್ಥಿವೇತನ ಕಾರ್ಯಕ್ರಮಗಳು |
| 1 | ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ |
| 2 | ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ |
| 3 | ವಿದ್ಯಾಸಿರಿ–ಊಟ ಮತ್ತು ವಸತಿ ಸಹಾಯ ಯೋಜನೆ |
| 4 | ಶುಲ್ಕ ಮರು ಪಾವತಿ |
| 5 | ಪೂರ್ಣಾವಧಿ ಪಿ.ಎಚ್.ಡಿ ಮಾಡುವ ವಿದ್ಯಾರ್ಥಿಗಳಿಗೆ ಫೆಲೋಷಿಪ್ |
| 6 | ದೇವರಾಜ ಅರಸು ವಿದೇಶಿ ವ್ಯಾಸಂಗ ವೇತನ |
| 7 | ದೇವರಾಜ ಅರಸು ಪ್ರತಿಭಾ ಪುರಸ್ಕಾರ |
| 8 | ನಿಲಯಾರ್ಥಿಗಳಿಗೆ ಪ್ರೋತ್ಸಾಹಧನ |
| 9 | ಐ.ಐ.ಟಿ, ಐ.ಐ.ಎಂ, ಐ.ಐ.ಎಸ್ಸಿ ಇತ್ಯಾದಿಗಳಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೆ ಒಂದು ಬಾರಿ ರೂ.2.00 ಲಕ್ಷ ಪ್ರೋತ್ಸಾಹಧನ |

| | ತರಬೇತಿ ಕಾರ್ಯಕ್ರಮಗಳು |
|---|---|
| 1 | ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಹಾಜರಾಗುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಪರೀಕ್ಷಾ ಪೂರ್ವ ತರಬೇತಿ |
| 2 | ನರ್ಸಿಂಗ್ ತರಬೇತಿ |
| 3 | ವಿಶ್ವವಿದ್ಯಾಲಯಗಳಲ್ಲಿನ ಹಿಂದುಳಿದ ವರ್ಗಗಳ ಕೋಶಕ್ಕೆ ಅನುದಾನ |
| 4 | ಕಾನೂನು ಪದವೀಧರರಿಗೆ ಶಿಷ್ಯವೇತನ |
| 5 | ಹೊಲಿಗೆ ತರಬೇತಿ ಕೇಂದ್ರಗಳ ನಿರ್ವಹಣೆ |
| 6 | ಸೇನೆಗಳಿಗೆ ಆಯ್ಕೆಯಾಗುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ತರಬೇತಿ |
| 7 | ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳಲ್ಲಿರುವ ವಿದ್ಯಾರ್ಥಿಗಳಿಗೆ ವೃತ್ತಿ ಮಾರ್ಗದರ್ಶನ ಹಾಗೂ ಸ್ಪರ್ಧಾತ್ಮಕ ಪರೀಕ್ಷಾ ಪೂರ್ವ ತರಬೇತಿ |
| | ಅಲೆಮಾರಿ ಮತ್ತು ಅರೆಅಲೆಮಾರಿ ಜನಾಂಗದ ಅಭಿವೃದ್ಧಿ ಕಾರ್ಯಕ್ರಮಗಳು |
| 1 | ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ವಿಶೇಷ ಪ್ರೋತ್ಸಾಹಧನ |
| 2 | ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಅರ್ಹತಾ ವಿದ್ಯಾರ್ಥಿವೇತನ |
| 3 | ಆಶ್ರಮ ಶಾಲೆಗಳ ನಿರ್ವಹಣೆ |
| 4 | ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶಾವಕಾಶ |
| 5 | ಅರಿವು ಮೂಡಿಸುವ ಕಾರ್ಯಕ್ರಮ |
| 6 | ಮೂಲಭೂತ ಸೌಕರ್ಯಗಳು |
| 7 | ವಸತಿ ಸೌಲಭ್ಯ |
| 8 | ನಿವೇಶನ ಹಂಚಿಕೆಗಾಗಿ ಜಮೀನು ಖರೀದಿ |
| 9 | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಮೂಲಕ ಅನುಷ್ಠಾನ ಮಾಡಲಾಗುತ್ತಿರುವ ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮ ಗಳು |
| | ವಿವಿಧ ಸಮುದಾಯಗಳ ಅಭಿವೃದ್ಧಿ |
| 1 | ಹಿಂದುಳಿದ ವರ್ಗಗಳ ಸಮುದಾಯಗಳು ನಿರ್ಮಿಸುವ ಸಮುದಾಯ ಭವನಗಳಿಗೆ ಸಹಾಯಾನುಧಾನ |
| 2 | ದೇವರಾಜ ಅರಸು ಭವನ ನಿರ್ಮಾಣ |

| | |
|---|---|
| **II.** | **ಕರ್ನಾಟಕ ರಾಜ್ಯ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತ** |
| | ಪಂಚವೃತ್ತಿ ಅಭಿವೃದ್ಧಿಗಾಗಿ ಆರ್ಥಿಕ ನೆರವು ಯೋಜನೆ |
| | ಸ್ವಯಂ ಉದ್ಯೋಗ ನೇರ ಸಾಲ ಯೋಜನೆ |
| | ಸ್ವಯಂ ಉದ್ಯೋಗ ಸಾಲ ಯೋಜನೆ (ಬ್ಯಾಂಕ್‌ಗಳ ಸಹಯೋಗದೊಂದಿಗೆ) |
| | ಅರಿವು–ಶೈಕ್ಷಣಿಕ ಸಾಲ ಯೋಜನೆ |
| | ಅರಿವು–ನವೀಕರಣ ವಿದ್ಯಾರ್ಥಿಗಳಿಗೆ |
| | ಗಂಗಾ ಕಲ್ಯಾಣ ವೈಯಕ್ತಿಕ ನೀರಾವರಿ ಯೋಜನೆ |
| | ಮಹಿಳೆಯರಿಗೆ ಮೈಕ್ರೋ ಕ್ರೆಡಿಟ್ ಸಾಲ ಯೋಜನೆ. (ಹೊಸಯೋಜನೆಗಳು) |
| **III.** | **ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ** |
| | ಸ್ವಯಂ ಉದ್ಯೋಗ ಸಾಲ ಯೋಜನೆ. |
| | ಸಾಂಪ್ರದಾಯಿಕ ವೃತ್ತಿದಾರರ ಸಾಲ ಯೋಜನೆ |
| | ಅರಿವು–ಶೈಕ್ಷಣಿಕ ಸಾಲ ಯೋಜನೆ. |
| | ಗಂಗಾ ಕಲ್ಯಾಣ ನೀರಾವರಿ ಯೋಜನೆ |
| | ಅಲೆಮಾರಿ/ಅರೆ ಅಲೆಮಾರಿ ಜನಾಂಗದ ಅಭಿವೃದ್ಧಿ ಯೋಜನೆಗಳು. |
| | ರಾಷ್ಟ್ರೀಯ ಹಿಂದುಳಿದ ವರ್ಗಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮದ ಸಾಲ ಯೋಜನೆಗಳು. |